**ಕರ್ನಾಟಕ ವಿಧಾನ ಪರಿಷತ್ತು**

**140ನೇ ಅಧಿವೇಶನ**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 254 (256)
ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಸಿ.ಕೊಂಡಯ್ಯ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 04-03-2020
ಉತ್ತರಿಸುವ ಸಚಿವರು : ಮಾನ್ಯ ಉಪಮುಖ್ಯಮಂತ್ರಿಗಳು, (ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ)

| ಕ್ರ.ಸಂ. | ಚುಕ್ಕೆ ರಹಿತ ಪ್ರಶ್ನೆ | ಉತ್ತರ |
|---|---|---|
| 1 | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ವ್ಯಾಪ್ತಿಯ ಕೆಲವು ಗ್ರಾಮಗಳಲ್ಲಿ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಕೆಶಿಪ್-3 ಯೋಜನೆಗೆ ಅವಶ್ಯವಿರುವ ಜಮೀನನ್ನು ಭೂ ಮಾಲೀಕರಿಂದ ಖರೀದಿಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ. | ಕೆಶಿಪ್-3ರ ಯೋಜನೆಯ ಮಾಗಡಿಯಿಂದ ಸೋಮವಾರ ಪೇಟೆವರೆಗೆ ರಾಜ್ಯ ಹೆದ್ದಾರಿ ರಸ್ತೆ ನಾಗಮಂಗಲ ತಾಲ್ಲೂಕಿನಲ್ಲಿ ಹಾದು ಹೋಗುತ್ತಿದ್ದು, ಒಟ್ಟು 613 ಸರ್ವೆ ನಂಬರ್ ಗಳಲ್ಲಿ 66.00 ಎಕರೆ ಖಾಸಗಿ ಜಮೀನು ಅವಶ್ಯವಿದೆ. ಈ ಪೈಕಿ 380 ಸರ್ವೆ ನಂಬರ್‌ಗಳಲ್ಲಿ ಒಟ್ಟು 31-04.25 ಎ-ಗು ಜಮೀನು ನೋಂದಣಿಯಾಗಿದ್ದು, ಉಳಿಕೆ 233 ಸರ್ವೆ ನಂಬರ್‌ಗಳಲ್ಲಿ ಒಟ್ಟು 24-35.75 ಎಕರೆ ನೋಂದಣಿಯಾಗಲು ಬಾಕಿ ಇದೆ. ಬಾಕಿ ಇರುವ ಪ್ರಕರಣಗಳು ತಾಲ್ಲೂಕು ಕಛೇರಿ, ಎ.ಡಿ.ಎಲ್.ಆರ್ ಕಛೇರಿಗಳಲ್ಲಿ ವಿವಿಧ ಹಂತಗಳಲ್ಲಿ ಬಾಕಿ ಇರುತ್ತದೆ. |
| 2 | ನಾಗಮಂಗಲ ತಾಲ್ಲೂಕು ದೇವಲಾಪುರ ಹೋಬಳಿಯಲ್ಲಿ ಈ ಯೋಜನೆಗೆ ಎಷ್ಟು ಜಮೀನು ಖರೀದಿಯಾಗಿದೆ. ಪರಿಹಾರ ವಿತರಿಸಲಾಗಿದೆ. ಪರಿಹಾರ ಹಣಕ್ಕಾಗಿ ಮಧ್ಯವರ್ತಿಗಳು ಒತ್ತಡ ತರುತ್ತಿರಬಹುದೇ. | ನಾಗಮಂಗಲ ತಾಲ್ಲೂಕು ದೇವಲಾಪುರ ಹೋಬಳಿಯಲ್ಲಿ ಈ ಕೆಳಕಂಡಂತೆ ಜಮೀನು ಖರೀದಿ ಆಗಬೇಕಾಗಿದ್ದು, ವಿವರ ಕೆಳಕಂಡಂತಿವೆ : (ಕೆಳಗಿನ ಕೋಷ್ಟಕ) |

| ಕ್ರ. ಸಂ. | ಗ್ರಾಮ | ಖರೀದಿಸಬೇಕಾದ ವಿಸ್ತೀರ್ಣ (ಎಕರೆ/ಗುಂಟೆ) | ಖರೀದಿಯಾಗಿರುವ ವಿಸ್ತೀರ್ಣ (ಎಕರೆ/ಗುಂಟೆ) |
|---|---|---|---|
| 1. | ದೇವಲಾಪುರ | 11-30.50 | 05-01.75 |
| 2. | ಕುಡುಗಬಾಳು | 20-33.75 | 02-32.50 |
| 3. | ಶೆಟ್ಟಿಹಳ್ಳಿ | 05-27.00 | 02-36.25 |
| 4. | ತಿಬ್ಬನಹಳ್ಳಿ | 03-15.50 | 01-20.25 |
| 5. | ತಟ್ಟಹಳ್ಳಿ | 07-09.00 | 01-02.00 |
| | **ಒಟ್ಟು** | **48-35.75** | **13-12.75** |

ಈ ಯೋಜನೆಗೆ **13-12.75 ಎಕರೆ/ಗುಂಟೆ** ಜಮೀನು ಖರೀದಿ ಆಗಿದ್ದು ಈ ಬಾಬ್ತು ರೂ.3.25 ಕೋಟಿಗಳನ್ನು ವಿತರಿಸಲಾಗಿದೆ. ಪರಿಹಾರ ಹಣಕ್ಕಾಗಿ ಮಧ್ಯವರ್ತಿಗಳು ಒತ್ತಡ ತಂದಿರುವುದು ಕಂಡುಬಂದಿರುವುದಿಲ್ಲ.

| ಕ್ರ.ಸಂ. | ಚುಕ್ಕೆ ರಹಿತ ಪ್ರಶ್ನೆ | ಉತ್ತರ |
|---|---|---|
| 3 | ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು, ದೇವಲಾಪುರ ಹೋಬಳಿ, ಕುಡುಗುಬಾಳು ಗ್ರಾಮದಲ್ಲಿ ಸ.ನಂ.24/ಸಿ ನಲ್ಲಿ 0-25.00 ಗುಂಟೆ ಜಮೀನಿನ ಮಾಲೀಕರಾದ ಬಡ ರೈತ ಮಹಿಳೆಯ 0-15.00 ಗುಂಟೆ ಜಮೀನು ಭೂಸ್ವಾಧೀನಕ್ಕೆ ಪರಿಹಾರ ಹಣವನ್ನು ವಿತರಿಸಲಾಗಿದೆಯೇ. | ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು, ದೇವಲಾಪುರ ಹೋಬಳಿ, ಕುಡುಗುಬಾಳು ಗ್ರಾಮದಲ್ಲಿ ಸ.ನಂ.24/ಸಿ ರ 0-25 ಗುಂಟೆ ಜಮೀನಿನ ಪೈಕಿ 0-15 ಗುಂಟೆ ಜಮೀನು ಸಂಬಂಧ ಭೂಸ್ವಾಧೀನ ಪರಿಹಾರ ಹಣ ಪಾವತಿಸಲು ಪ್ರಕರಣವು 11ಇ ನಕ್ಷೆ ಪಡೆಯಲು ಬಾಕಿ ಇದ್ದು ಶೀಘ್ರವಾಗಿ ಪರಿಹಾರ ವಿತರಿಸಲು ಕ್ರಮ ಕೈಗೊಳ್ಳಲಾಗುವುದು. |

| | | |
|---|---|---|
| 4 | ಈ ಮಧ್ಯೆ ಕೆಲವು ಮಧ್ಯವರ್ತಿಗಳು ಪರಿಹಾರ ಹಣಕ್ಕಾಗಿ ಈ ಮಹಿಳೆಗೆ ಮೋಸ ಮಾಡುವ ಸಲುವಾಗಿ ಸರ್ವೆ ನಂ.24/ಬಿಪಿ1 ಎಂದು ಖಾತೆ ತೆರೆಯಿಸಿ, ಪರಿಹಾರ ಹಣಕ್ಕಾಗಿ ಪ್ರಯತ್ನಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಇದರಲ್ಲಿ ಅಧಿಕಾರಿಗಳು ಶಾಮೀಲಾಗಿರುವರೇ: ಸ.ನಂ.24/ಬಿ ಯಾರ ಹೆಸರಿನಲ್ಲಿದೆ: ಎಷ್ಟು ವರ್ಷಗಳಿಂದಿದೆ: ಸ.ನಂ.24/ಬಿಪಿ1 ಎಂದು ಯಾರಿಂದ ಯಾರಿಗೆ ಖಾತೆ ವರ್ಗಾವಣೆ ಗೊಂಡಿದೆ. | • ಸದರಿ ಸ.ನಂ. ಪರಿಹಾರ ಹಣಕ್ಕಾಗಿ ಮಧ್ಯವರ್ತಿಗಳು ಪ್ರಯತ್ನಿಸಿರುವುದು ಕಂಡುಬಂದಿರುವುದಿಲ್ಲ.<br>• ಇದರಲ್ಲಿ ಅಧಿಕಾರಿಗಳು ಶಾಮೀಲಾಗಿರುವುದು ಕಂಡುಬಂದಿರುವುದಿಲ್ಲ.<br>• ಸ.ನಂ. 24/ಬಿ ಆರ್.ಟಿ.ಸಿ. ಹಾಗೂ ಆಕಾರಬಂದ್ ಪರಿಶೀಲಿಸಲಾಗಿ 24/ಬಿ ಆರ್.ಟಿ.ಸಿ. ಇರುವುದಿಲ್ಲ.<br>• ಸ.ನಂ.24/ಬಿಪಿ1 0–25 ಗುಂಟೆ ನಂದಿನಿ ಕೋಂ ಚಿಕ್ಕಬೋರೇಗೌಡ ರವರಿಗೆ ಎಂ.ಆರ್:13/2000–01 ರಂತೆ ಮಂಜುಳ ಕೋಂ ವರದರಾಜು ರವರಿಂದ ಖಾತೆಯಾಗಿರುತ್ತದೆ. |

ಸಂಖ್ಯೆ:ಲೋಇ E-32 ಇಎಪಿ 2020

**(ಗೋವಿಂದ ಎಂ. ಕಾರಜೋಳ)**
ಮಾನ್ಯ ಉಪಮುಖ್ಯಮಂತ್ರಿಗಳು,
(ಲೋಕೋಪಯೋಗಿ ಹಾಗೂ ಸಮಾಜ ಕಲ್ಯಾಣ ಇಲಾಖೆ)